


# ಕರ್ನಾಟಕ ವಿಧಾನಪರಿಷತ್ತು

ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ರಹಿತ ಪ್ರಶ್ನೆ**

ದಿನಾಂಕ : 26-03-2021 ಪ್ರಶ್ನೆ ಸಂಖ್ಯೆ : 1935(2211)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಕೆ. ಪ್ರತಾಪಚಂದ್ರ ಶೆಟ್ಟಿ(ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರ ನೀಡಬೇಕಾದ ದಿನಾಂಕ : 26-03-2021

ಉತ್ತರಿಸುವ ಸಚಿವರು: ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು

ವಿಷಯ : ಕೆ.ಎಸ್.ಆರ್.ಟಿ.ಸಿ. ಬಸ್ ನಿಲ್ದಾಣಗಳಲ್ಲಿನ ಶೌಚಾಲಯಗಳ ಕುರಿತು

(ಅ) ಕೆ.ಎಸ್.ಆರ್.ಟಿ.ಸಿ., ಬಸ್ ನಿಲ್ದಾಣದ ಶೌಚಾಲಯಗಳಲ್ಲಿ ಹಣಪಾವತಿ ವಿವರವನ್ನು ಕಡ್ಡಾಯವಾಗಿ ನಾಮಫಲಕ ಅಳವಡಿಸುವ ಮುಖಾಂತರ ಪ್ರಯಾಣಿಕರಿಗೆ ತಿಳಿಸಲಾಗುವುದೇ ; ಇಲ್ಲವಾದಲ್ಲಿ, ಬೇಕಾಬಿಟ್ಟಿಯಾಗಿ ಹಣವಸೂಲಿ ಮಾಡುವ ದಂಧೆಗೆ ಸರ್ಕಾರವೇ ಅವಕಾಶ ಮಾಡಿಕೊಟ್ಟಂತಾಗುವುದಿಲ್ಲವೇ;

(ಆ) ಕೆಲವು ಕಡೆಗಳಲ್ಲಿ ಉದ್ದೇಶಪೂರ್ವಕವಾಗಿ ಹಣಪಾವತಿ ವಿವರಗಳನ್ನು ಅಳಿಸಿ ಹಾಕುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ , ಕೈಗೊಂಡಿರುವ ಕ್ರಮಗಳಾವುವು;

(ಇ) ಶೌಚಾಲಯಗಳಲ್ಲಿ ಚಿಲ್ಲರೆ ಕೊರತೆಯಿಂದ ಅನಾವಶ್ಯಕವಾಗಿ ಪ್ರಯಾಣಿಕರು ಕಿರುಕುಳ ಅನುಭವಿಸುತ್ತಿರುವ ಹಿನ್ನೆಲೆಯಲ್ಲಿ Prepaid card ವ್ಯವಸ್ಥೆಯನ್ನು ಜಾರಿಗೆ ತರಲು ಇಲಾಖೆ ಕ್ರಮ ತೆಗೆದುಕೊಳ್ಳುವುದೇ ; ಇಲ್ಲವಾದಲ್ಲಿ ಕಾರಣಗಳೇನು?